# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಆಗಸ್ಟ್ ೧೩, ೨೦೧೫ (ಶ್ರಾವಣ ೨೨, ಶಕ ವರ್ಷ ೧೯೩೭)<br>Bengaluru, Thursday, August 13, 2015 (Shravana 22, Shaka Varsha 1937) | ಸಂಚಿಕೆ ೩೩<br>Issue 33 |
|---|---|---|

## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

**ಪಟ್ಟಣ ಪಂಚಾಯ್ತಿ ಕಾರ್ಯಾಲಯ, ಶೃಂಗೇರಿ. ಚಿಕ್ಕಮಗಳೂರು ಜಿಲ್ಲೆ-577 139.**

**:ಪ್ರಕಟಣೆ: ಸಂ:ಶೃಂ.ಪ.ಪಂ. ಕಿ.ಆ.ನಿ. ಸಿ.ಆರ್. 01/2015-16, ದಿನಾಂಕ:05-03-2015**

ಶೃಂಗೇರಿ ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿ ವಿವಿಧ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಪಟ್ಟಣ ಪಂಚಾಯ್ತಿ ಆದಾಯವನ್ನು ಹೆಚ್ಚಿಸುವ ಬಗ್ಗೆ ವಿವಿಧ ಬಾಬುಗಳಿಂದ ಕ್ರೂಢೀಕೃತ ದರಗಳನ್ನು ಪರಿಷ್ಕರಿಸಲು ಶೃಂಗೇರಿ ಪಟ್ಟಣ ಪಂಚಾಯ್ತಿಯ ಅಧ್ಯಕ್ಷರಾದ ಶ್ರೀಮತಿ ಶೋಭಾ ಅನಂತಯ್ಯ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 02-03-2015ರಂದು ನಡೆದ ಸಾಮಾನ್ಯ ಸಭೆಯ ವಿಷಯದ ನಂ:10 ರಲ್ಲಿ ತೀರ್ಮಾನಿಸಲಾಗಿದೆ. ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 334 ರಂತೆ ದಿನಾಂಕ:01-04-2015 ರಿಂದಲೇ ಜಾರಿಗೆ ಬರುವಂತೆ ವಿವಿಧ ಬಾಬುಗಳ ಶುಲ್ಕಗಳನ್ನು ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಪ್ರಕಟಣೆಯಾದ 30 ದಿನಗಳ ಒಳಗಾಗಿ ಸಕಾರಣ ಸಹಿತ ಸಲ್ಲಿಸಲು ಸಾರ್ವಜನಿಕರಿಗೆ ಅವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಪಟ್ಟಣ ಪಂಚಾಯ್ತಿ ಕಛೇರಿಯಲ್ಲಿ ಹಾಲಿ ವಸೂಲಿ ಮಾಡುತ್ತಿರುವ ಶುಲ್ಕವಾರು ಪರಿಷ್ಕರಣೆ ಪಟ್ಟಿ.

| ಕ್ರ.ಸಂ. | ವಿಷಯ | ಹಾಲಿ ಇರುವ ದರ | ಪರಿಷ್ಕೃತ ದರ (01-04-2015 ರಿಂದ ಜಾರಿ) |
|---|---|---|---|
| 1 | ನಕಲುಗಳು | 100-00 | 120-00 |
| 2 | ದೃಢೀಕರಣ | 100-00 | 120-00 |
| 3 | ವಿದ್ಯುತ್ ನಿರಾಕ್ಷೇಪಣಾ ವಾಣಿಜ್ಯ 1 ಮೀಟರ್‌ಗೆ<br>ವಸತಿ 1 ಮೀಟರ್‌ಗೆ | 1,500-00<br>500-00 | 2,000-00<br>750-00 |
| 4 | ಕಟ್ಟಡ ಪರವಾನಿಗೆ<br>ವಾಣಿಜ್ಯ ಚ.ಅಡಿಗೆ<br>ವಸತಿ ಚ.ಅಡಿಗೆ | <br>4-00<br>2-00 | <br>8-00<br>4-00 |
| 5 | ಕಟ್ಟಡ ದುರಸ್ಥಿ. | 500-00 | 550-00 |
| 6 | ಕಟ್ಟಡ ನೆಲಸಮಗೊಳಿಸಲು | 1,000-00 | 1,500-00 |
| 7 | ಹಕ್ಕು ವರ್ಗಾವಣೆ<br>ರಿಜಿಸ್ಟರ್ ಪತ್ರ | ಮುದ್ರಾಂಕ ಶುಲ್ಕದ ಶೇ1% | ಮುದ್ರಾಂಕ ಶುಲ್ಕದ ಶೇ1.5% |
| | ಪೌತಿ ತಃಖ್ತೆ | 300-00 | 350-00 |
| 8 | ಜಾಹಿರಾತು ಶುಲ್ಕ ಚ.ಅಡಿಗೆ | 15-00 | 15-00 |
| 9 | ನೀರಿನ ಟ್ಯಾಂಕರ್ ಬಾಡಿಗೆ<br>ಪಟ್ಟಣದ ಒಳಭಾಗ 1 ಟ್ಯಾಂಕರ್‌ಗೆ | <br>750-00 | <br>750-00 |

| ಕ್ರ.ಸಂ. | ವಿಷಯ | ಹಾಲಿ ಇರುವ ದರ | ಪರಿಷ್ಕೃತ ದರ (01–04–2015 ರಿಂದ ಜಾರಿ) |
|---|---|---|---|
| | ಪಟ್ಟಣದ ಹೊರಭಾಗ/ ಮೆಣಸೆ<br>ಕಲ್ಕಟ್ಟೆ<br>ಕಿಗ್ಗಾ & ತೆಕ್ಕೂರು<br>ಸರ್ಕಾರಿ & ಧನ್ವಂತರಿ ಆಸ್ಪತ್ರೆ | 800–00<br>800–00<br>1,000–00<br>500–00 | 800–00<br>800–00<br>1,000–00<br>500–00 |
| 10 | ಸಕ್ಕಿಂಗ್ ಮಿಷನ್<br>ಪಟ್ಟಣದ ಒಳಭಾಗ<br>ಪಟ್ಟಣದ ಹೊರಭಾಗ(ಕಿ.ಮೀ.ಲೆಕ್ಕದಲ್ಲಿ) | <br>1,500–00<br>2,000–00 | <br>1,500–00<br>2,500–00 |
| 11 | ನೀರಿನ ಕಂದಾಯ<br>ವಸತಿ<br>ವಾಣಿಜ್ಯ<br>ಗ್ರಾಮಾಂತರ ವಸತಿ ಸಂಪರ್ಕ | <br>65–00<br>130–00<br>65–00 | <br>75–00<br>150–00<br>100–00 |
| 12 | ತಳ್ಳುವ ಗಾಡಿ ನೆಲಬಾಡಿಗೆ ಒಂದು ದಿನಕ್ಕೆ | 10–00 | 25–00 |
| 13 | ಗಾಂಧೀ ಮೈದಾನದಲ್ಲಿ ಅಡುಗೆ ಮಾಡುವ ಪ್ರವಾಸಿಗರಿಂದ ಸ್ವಚ್ಛತಾ ಫೀ ವಸೂಲಿ ಬಾಬ್ತು | 100–00 | 100–00 |
| 14 | ಅಳತೆ ಫೀ ಬಾಬ್ತು | 500–00 | 750–00 |
| 15 | ಲಾಡ್ಜ್‌ಗಳು 1 ರಿಂದ 10 ರೂಂ ಗಳಿಗೆ<br>10 ರಿಂದ 20 ರೂಂ ಗಳಿಗೆ<br>20 ರಿಂದ 50 ರೂಂ ಗಳಿಗೆ<br>50 ಕ್ಕೂ ಮೇಲ್ಪಟ್ಟ ರೂಂಗಳಿಗೆ | ರೂ:1000–00 | 1 ರಿಂದ 10 ರೂಂ ಗಳ ವರೆಗೆ ರೂ:1000–00<br>10 ರೂಂ ಗಳ ಮೇಲ್ಪಟ್ಟು ಪ್ರತಿ ರೂಮಿಗೆ 100/–ರಂತೆ ಶುಲ್ಕ ನಿಗಧಿಸಿದೆ. |
| 16 | ಗಾಂಧೀ ಮೈದಾನದಲ್ಲಿರುವ ಸಂಚಾರಿ ಅಂಗಡಿಗಳ ಸ್ವಚ್ಚತೆಯ ಫೀ ಬಾಬ್ತು ದಿನ ಒಂದಕ್ಕೆ. | 50–00 | 50–00 |

**PD. 2**

**SC. 5** ಮುಖ್ಯಾಧಿಕಾರಿ ಪಟ್ಟಣ ಪಂಚಾಯ್ತಿ, ಶೃಂಗೇರಿ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ ಸಂ: ಕೆ.ಎಸ್.ಎ.ಸಿಆರ್: 46/13–14. ದಿನಾಂಕ: 04–09–2014

ಸಂ: ಕೆ.ಎಸ್.ಎ:ಸಿಆರ್:46/12–13 ದಿನಾಂಕ: 16/12/2013ರಂದು ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆರ್.ಆರ್. ನಗರ ವಲಯದ ವ್ಯಾಪ್ತಿಗೆ ಬರುವ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಸಜ್ಜೆ ಪಾಳ್ಯ ಸರ್ವೆ ನಂ. 3 ರಲ್ಲಿ 37/ ½ ಗುಂಟೆ ವಿಸ್ತೀರ್ಣದಲ್ಲಿರುವ ಮಾತಾಪುರ ದಲಿತ ಕಾಲೋನಿ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಅಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಆಯುಕ್ತರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊಅಮ /ಕಂ/ಮಾತಪುರ/ಕೊ.ಪ್ರ.ಘೋ/2014–15/. ದಿನಾಂಕ: 23–04–2014. ರ ಪತ್ರದಲ್ಲಿ ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ಹಾಗೂ ಜಂಟಿ ಆಯುಕ್ತರು ಮತ್ತು ಸಹಾಯಕ ಕಂದಾಯ ಅಧಿಕಾರಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ದಿನಾಂಕ: 4/3/2014ರಂದು ಸ್ಥಳ ಪರಿಶೀಲನೆ ಮಾಡಲಾಗಿದ್ದು, ಸದರಿ ಕೊಳಚೆ ಪ್ರದೇಶದಲ್ಲಿ 69 ಕುಟುಂಬಗಳ ಪೈಕಿ ಸುಮಾರು 26 ಕುಟುಂಬಗಳ ಸದಸ್ಯರು ಕುಷ್ಠ ರೋಗದಿಂದ ಕೂಡಿದ್ದು, ಸುಮಾರು 40 ರಿಂದ 60ರಷ್ಟು ಗುಣಮುಖರಾಗಿರುತ್ತಾರೆ. ಈ ಎಲ್ಲ ಕುಟುಂಬಗಳು ಎ.ಸಿ.ಶೀಟ್ ಮನೆಗಳನ್ನು ನಿರ್ಮಿಸಿಕೊಂಡು ಸುಮಾರು 20 ವರ್ಷಗಳಿಂದ ವಾಸ ಮಾಡುತ್ತಿರುವುದು ಕಂಡು ಬಂದಿರುತ್ತದೆ. ಸದರಿ ಪ್ರದೇಶದಲ್ಲಿ ಮೂಲಭೂತ ಸೌಲಭ್ಯ ಕಲ್ಪಿಸುವ ಅಗತ್ಯವಿರುವುದರಿಂದ ಮಂಡಳಿ ಕಾಯ್ದೆ ನಿಯಮ 3 ರಂತೆ ಅಂತಿಮಗೊಳಿಸಲು ಸೂಕ್ತ ಪ್ರದೇಶವೆಂದು ವರದಿ ಸಲ್ಲಿಸಿರುತ್ತಾರೆ.

ಮುಂದುವರೆದಂತೆ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ರವರ ಪತ್ರದ ದಿನಾಂಕ: 07.08.2014ರಲ್ಲಿ ಸದರಿ ಪ್ರದೇಶವನ್ನು ಮಂಡಳಿಯ ಕಾಯ್ದೆ ಕಲಂ 3ರಂತೆ ಅಂತಿಮವಾಗಿ ಘೋಷಿಸಲು ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ ಎಂದು ಸದರಿ ಜಮೀನು ಕುರಿತು ಸರ್ವೋಚ್ಛ ನ್ಯಾಯಾಲಯದಲ್ಲಿ ದಾವೆ ಸಂ. ಎಸ್.ಎಲ್.ಪಿ(ಸಿ)20746/97ರ ದಿನಾಂಕ: 28.08.1998 ಮತ್ತು ರಾಜ್ಯ ಉಚ್ಛ ನ್ಯಾಯಾಲಯದ ಡಬ್ಲ್ಯೂಪಿ ನಂ. 1041/96 ರಂತೆ ದಾವೆ ಇರುವುದೆಂದು ವರದಿಯನ್ನು ಸಲ್ಲಿಸಿರುತ್ತಾರೆ.

ಇದು ಕೊಳಚೆ ಪ್ರದೇಶಗಳ ಗುಣಲಕ್ಷಣಗಳನ್ನು ಹೊಂದಿದ್ದು, ಸದರಿ ಕೊಳಚೆ ಪ್ರದೇಶದಲ್ಲಿ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಕುಡಿಯುವ ನೀರು ಬೀದಿ ದೀಪ, ಚರಂಡಿ, ಶೌಚಾಲಯ ಮತ್ತು ಇನ್ನಿತರೆ ಮೂಲ ಸೌಲಭ್ಯ ಕಲ್ಪಿಸುವ ಅಗತ್ಯವಿರುವುದರಿಂದ ಮಾನ್ಯ ಸರ್ವೋಚ್ಛ ನ್ಯಾಯಾಲಯ ಮತ್ತು ರಾಜ್ಯ ಉಚ್ಛ ನ್ಯಾಯಾಲಯ ಹಾಗೂ ಯಾವುದೇ ಇತರೆ ನ್ಯಾಯಾಲಯಗಳಲ್ಲಿ ಮುಂದೆ ಆಗುವಂತಹ ಆದೇಶಗಳ ಷರತ್ತುಗಳಿಗೊಳಪಟ್ಟು (ಅಂತಿಮ ತೀರ್ಪು) ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಅಡಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆ ಕಲಂ 3 ರಡಿಯಲ್ಲಿ ಅಂತಿಮವಾಗಿ **"ಕೊಳಚೆ ಪ್ರದೇಶ"** ವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆರ್. ಆರ್. ನಗರ ವಲಯದ ವ್ಯಾಪ್ತಿಯಲ್ಲಿ ಬರುವ ಸಜ್ಜೆ ಪಾಳ್ಯ "ಮಾತಾಪುರ ದಲಿತ ಕಾಲೋನಿ" ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.**

| ಕ.ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಮಾತಾಪುರ ದಲಿತ ಕಾಲೋನಿ ಕೊಳಚೆ ಪ್ರದೇಶ ಸಜ್ಜೆಪಾಳ್ಯ ಯಶವಂತಪುರ ಹೋಬಳಿ ಬೆಂಗಳೂರು ಉತ್ತರ ತಾಲ್ಲೂಕು | ಆರ್.ಟಿ.ಸಿಯಂತೆ ಸರ್ಕಾರಿ ಬೆಗ್ಗರ್ ಕಾಲೋನಿ ಹಾಗೂ ಸುಮ್ಮನಹಳ್ಳಿ ಕುಷ್ಠರೋಗಿಗಳ ಕೇಂದ್ರ | 03 | 37 ½ | ಸದರಿ ಸರ್ವೆ ನಂ. ನ ಉಳಿಕೆ ಪ್ರದೇಶ | ಸ್ಮಶಾನ ಮತ್ತು ಸದರಿ ಸರ್ವೆ ನಂ. ನ ಉಳಿಕೆ ಪ್ರದೇಶ | ಚರಂಡಿ | ರಸ್ತೆ |

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**PR. 77**
**SC. 50**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಪ್ರಿಲಿಮಿನರಿ ಅಧಿಸೂಚನೆ ಸಂ: ಕೆ.ಎಸ್.ಎ.ಸಿಆರ್: 37/14-15. ದಿನಾಂಕ: 20.10.2014**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿ ವಿಧಾನಸಭಾ ಕ್ಷೇತ್ರದ ಸಜ್ಜೆಪಾಳ್ಯ ಗ್ರಾಮ ಸರ್ವೆ ನಂ. 3ರಲ್ಲಿರುವ ದಿ॥ ದೇವರಾಜ ಅರಸು ಕಾಲೋನಿ ಕೊಳಚೆ ಪ್ರದೇಶದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 108 ಕುಟುಂಬಗಳು ವಾಸವಾಗಿದ್ದು, ಸದರಿ ಪ್ರದೇಶವು ಮನುಷ್ಯ ವಾಸ ಮಾಡಲು ಯೋಗ್ಯವಲ್ಲದ ಹಾಗೂ ಅನಾರೋಗ್ಯಕರ ಪರಿಸ್ಥಿತಿಯಲ್ಲಿರುತ್ತಾರೆ. ಕುಡಿಯುವ ನೀರು, ಬೀದಿ ದೀಪ, ಶೌಚಾಲಯ ಮುಂತಾದ ಮೂಲಸೌಲಭ್ಯಗಳನ್ನು ಒದಗಿಸುವ ಅಗತ್ಯವಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಅಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಲು ಆಯುಕ್ತರು, ಕರ್ನಾಟಕ ಕೊಳಗೇರೆ ಅಭಿವೃದ್ಧಿ ಮಂಡಳಿ ಇವರಿಂದ ಪತ್ರ ಸಂಖ್ಯೆ: ಕಕೊಅಮ/ಕಂ/ದೇ.ಅ.ಕಾಲೋನಿ/ಕೊ.ಪ.ಘೋ/2014-15/382, ದಿನಾಂಕ: 16-08-2014 ಮತ್ತು ಸಂಖ್ಯೆ: ಕಕೊಅಮ/ಕಂ/ಬೆಂ/2014-15/455, ದಿನಾಂಕ: 15.09.2014ರಂತೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಏತನ್ಮಧ್ಯೆ ಸರ್ಕಾರದ ಸುತ್ತೋಲೆ ಸಂಖ್ಯೆ: 71/ಕೋಮಂಇ/2009, ದಿನಾಂಕ: 24.02.2010ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ಮತ್ತು 11 ರಡಿಯಲ್ಲಿ ಜಿಲ್ಲಾಧಿಕಾರಿಗಳು, ಕೊಳಚೆ ಪ್ರದೇಶಗಳನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವ ಮುನ್ನ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರ ಅನುಮೋದನೆ ಪಡೆಯತಕ್ಕದ್ದೆಂದು ಸೂಚನೆಯಿದ್ದು, ಆ ಪ್ರಕಾರವಾಗಿ ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಬೇಕಾದ ಪ್ರಸ್ತಾವನೆಗಳನ್ನು ಈ ಕಛೇರಿಯಿಂದ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗುತ್ತಿದ್ದು, ತದನಂತರದಲ್ಲಿ ಸರ್ಕಾರದ ಪತ್ರ ಸಂಖ್ಯೆ ವಇ 71/ಕೊಮಂಇ/2009, ದಿನಾಂಕ: 12.07.2010ರ ಪತ್ರದಲ್ಲಿ ಕೊಳಚೆ ಪ್ರದೇಶಗಳೆಂದು ಘೋಷಿಸುವ ಬಗ್ಗೆ ಇನ್ನು ಮುಂದೆ ಸರ್ಕಾರದ ಪೂರ್ವಾನುಮೋದನೆ ಕೋರಿ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವ ಬದಲು ದಿನಾಂಕ: 02.07.2010ರಲ್ಲಿನ ಸೂಚನೆಯಂತೆ ಮತ್ತು ಹಾಲಿ ಅಸ್ತಿತ್ವದಲ್ಲಿರುವ ನಿಯಮಗಳಡಿಯ ಕಾರ್ಯವಿಧಾನವನ್ನು ಅನುಸರಿಸಿದಂತೆ ಕ್ರಮವಹಿಸಿ, ಅಧಿಸೂಚನೆ ಸಂಖ್ಯೆ: ವಇ/73/ಕೊಮಂಇ/2001, ದಿನಾಂಕ: 26.06.2002ರಲ್ಲಿ ಜಿಲ್ಲಾಧಿಕಾರಿಗಳಿಗೆ ಪ್ರದತ್ತ ಮಾಡಲಾಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಘೋಷಣೆಗೆ ಕ್ರಮವಹಿಸುವುದು ಎಂದು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆ.

ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು **" ಕೊಳಚೆ ಪ್ರದೇಶ"** ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-560 020 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ದಿ॥ ದೇವರಾಜ ಅರಸು ಕಾಲೋನಿ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ:

| ಕ.ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ದಿ॥ ದೇವರಾಜ ಅರಸು ಕಾಲೋನಿ, ಸಜ್ಜೆಪಾಳ್ಯ ಸ.ನಂ. 3 | ಆರ್.ಟಿ.ಸಿಯಂತೆ ಸರ್ಕಾರಿ ಬೆಗ್ಗರ್ ಕಾಲೋನಿ ಹಾಗೂ ಸುಮ್ಮನಹಳ್ಳಿ ಕುಷ್ಠರೋಗಿಗಳ ಕೇಂದ್ರ | 03 | 0-27 ಗುಂಟೆ | ರಿಂಗ್ ರಸ್ತೆ | ಮಾತಾಪುರ ದಲಿತ ಕಾಲೋನಿ | ಚರಂಡಿ ಮತ್ತು ಮಾತಾಪುರ ದಲಿತ ಕಾಲೋನಿ | ರಸ್ತೆ |

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**PR. 78**
**SC. 50**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂ: ಕೆ.ಎಸ್.ಎ.ಸಿಆರ್: 38/14-15. ದಿನಾಂಕ: 20.10.2014**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಬ್ಯಾಟರಾಯನಪುರ ವಿಧಾನಸಭಾ ಕ್ಷೇತ್ರದ ಹೆಬ್ಬಾಳ ಮೇಲ್ಸೇತುವೆ ಬಳಿ ಖಾಸಗಿ ಜಮೀನಿನಲ್ಲಿರುವ ಬಣಜಿಗರ ಕೊಳಚೆ ಪ್ರದೇಶದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 130 ಕುಟುಂಬಗಳು ವಾಸವಾಗಿದ್ದು, ಸದರಿ ಪ್ರದೇಶವು ಮನುಷ್ಯ ವಾಸ ಮಾಡಲು ಯೋಗ್ಯವಲ್ಲದ ಹಾಗೂ ಅನಾರೋಗ್ಯಕರ ಪರಿಸ್ಥಿತಿಯಲ್ಲಿರುತ್ತಾರೆ. ಕುಡಿಯುವ ನೀರು, ಬೀದಿ ದೀಪ, ಶೌಚಾಲಯ ಮುಂತಾದ ಮೂಲಸೌಲಭ್ಯ ಹಾಗೂ ಪುನರ್-ವಸತಿ ಕಲ್ಪಿಸುವ ಅಗತ್ಯವಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಅಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಲು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರಿಂದ ಪತ್ರ ಸಂಖ್ಯೆ: ಕಕೊಅಮ/ಕಂ/ಬೆಂ/ಬ್ಯಾಟರಾಯನಪುರ/2014-15/371, ದಿನಾಂಕ: 19.08.2014ರಂತೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಏತನ್ಮಧ್ಯೆ ಸರ್ಕಾರದ ಸುತ್ತೋಲೆ ಸಂಖ್ಯೆ: 71/ಕೊಮಂಇ/2009, ದಿನಾಂಕ: 24.02.2010ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ಮತ್ತು 11 ರಡಿಯಲ್ಲಿ ಜಿಲ್ಲಾಧಿಕಾರಿಗಳು, ಕೊಳಚೆ ಪ್ರದೇಶಗಳನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವ ಮುನ್ನ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರ ಅನುಮೋದನೆ ಪಡೆಯತಕ್ಕದ್ದೆಂದು ಸೂಚನೆಯಿದ್ದು, ಆ ಪ್ರಕಾರವಾಗಿ ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಬೇಕಾದ ಪ್ರಸ್ತಾವನೆಗಳನ್ನು ಈ ಕಛೇರಿಯಿಂದ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗುತ್ತಿದ್ದು, ತದನಂತರದಲ್ಲಿ ಸರ್ಕಾರದ ಪತ್ರ ಸಂಖ್ಯೆ ವಇ 71/ಕೊಮಂಇ/2009, ದಿನಾಂಕ: 12.07.2010ರ ಪತ್ರದಲ್ಲಿ ಕೊಳಚೆ ಪ್ರದೇಶಗಳೆಂದು ಘೋಷಿಸುವ ಬಗ್ಗೆ ಇನ್ನು ಮುಂದೆ ಸರ್ಕಾರದ ಪೂರ್ವಾನುಮೋದನೆ ಕೋರಿ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವ ಬದಲು ದಿನಾಂಕ: 02.07.2010ರಲ್ಲಿನ ಸೂಚನೆಯಂತೆ ಮತ್ತು ಹಾಲಿ ಅಸ್ತಿತ್ವದಲ್ಲಿರುವ ನಿಯಮಗಳಡಿಯ ಕಾರ್ಯವಿಧಾನವನ್ನು ಅನುಸರಿಸಿದಂತೆ ಕ್ರಮವಹಿಸಿ, ಅಧಿಸೂಚನೆ ಸಂಖ್ಯೆ: ವಇ/73/ಕೊಮಂಇ/2001, ದಿನಾಂಕ: 26.06.2002ರಲ್ಲಿ ಜಿಲ್ಲಾಧಿಕಾರಿಗಳಿಗೆ ಪ್ರದತ್ತ ಮಾಡಲಾಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಘೋಷಣೆಗೆ ಕ್ರಮವಹಿಸುವುದು ಎಂದು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆ.

ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಅಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು **" ಕೊಳಚೆ ಪ್ರದೇಶ"** ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-560 020 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಬ್ಯಾಟರಾಯನಪುರ ವಿಧಾನಸಭಾ ಕ್ಷೇತ್ರದ ಹೆಬ್ಬಾಳ ಮೇಲ್ಸೇತುವೆ ಬಳಿಯಿರುವ ಬಣಜಿಗರ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತ:ಖ್ತೆ:

| ಕ.ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಬಣಜಿಗರ ಕೊಳಚೆ ಪ್ರದೇಶ, ಬ್ಯಾಟರಾಯನಪುರ ವಿಧಾನಸಭಾ ಕ್ಷೇತ್ರ | ಪಿಳ್ಳಮ್ಮ, ತಂಗಮ್ಮ, ಹೆಚ್.ಡಿ.ದಾಸಪ್ಪ, ಹೆಚ್.ಡಿ.ಚಿಕ್ಕಮುನಿಯಪ್ಪ, ಮುನಿಶಾಮಪ್ಪ | 98/1,2 | 0-25,08 ಗುಂಟೆ | 98, 99ರ ಉಳಿಕೆ ಜಮೀನು ಮತ್ತು ರಸ್ತೆ | ಸ.ನಂ. 99ರ ಉಳಿಕೆ ಜಮೀನು ಮತ್ತು ಸ.ನಂ. 100ರ ಜಮೀನು. | ಹೆಬ್ಬಾಳ ರಸ್ತೆ ಮತ್ತು ಸ.ನಂ. 98 ಮತ್ತು 99ರ ಉಳಿಕೆ | ಹೆಬ್ಬಾಳದಿಂದ ಸೇಲಂ ಕಡೆಗೆ ಹೋಗುವ ರೈಲ್ವೆ ಮಾರ್ಗ |
| | | ದಾಸೇಗೌಡ ಬಿನ್ ಸೊನ್ನೇಗೌಡ, ಸರ್ಕಾರ, ಪಿಳ್ಳಮ್ಮ, ತಾನಮ್ಮ, ರಾಮಣ್ಣ, ಭೀಮಣ್ಣ ರಾಮಕೃಷ್ಣಪ್ಪ, ವಿಶ್ವನಾಥ, ಎಂ. ರಾಮಯ್ಯ, ಪಾಪಮ್ಮ ಕೋಂ ಲೇಟ್ ಭೀಮಯ್ಯ | 99/1,2,3,4 | | | | | |

**ವಿ. ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

PR. 79
SC. 50

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59